# ಕರ್ನಾಟಕ ವಿಧಾನಸಭೆ

ಹದಿನಾಲ್ಕನೇ ವಿಧಾನಸಭೆ
(ನಾಲ್ಕನೇ ಅಧಿವೇಶನ)

## ಕಾರ್ಯಕಲಾಪಗಳ ಪಟ್ಟಿ

ಸೋಮವಾರ, ದಿನಾಂಕ 14ನೇ ಜುಲೈ, 2014
(ಸಮಯ: ಬೆಳಗ್ಗೆ 11.00 ಗಂಟೆಗೆ)

-----

### 1. ವಿತ್ತೀಯ ಕಾರ್ಯಕಲಾಪಗಳು

2014-15ನೇ ಸಾಲಿನ ಈ ಕೆಳಕಂಡ ಅನುದಾನ ಬೇಡಿಕೆಯ ಮೇಲೆ ಮುಂದುವರೆದ ಚರ್ಚೆ ಹಾಗೂ ಸರ್ಕಾರದ ಉತ್ತರ ಮತ್ತು ಮತಕ್ಕೆ ಹಾಕುವುದು.

| **ಬೇಡಿಕೆ ಸಂಖ್ಯೆ** | **ಬೇಡಿಕೆಯ ಹೆಸರು** |
|---|---|
| 24 | ಇಂಧನ |

### 2 . ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯದ ಬಗ್ಗೆ ಅಲ್ಪ ಕಾಲಾವಧಿ ಚರ್ಚೆ

1. ಶ್ರೀಯುತರುಗಳಾದ ಡಾ|| ಕೆ.ಸುಧಾಕರ, ಎಸ್.ಎನ್. ನಾರಾಯಣಸ್ವಾಮಿ, ಎಸ್.ಎನ್. ಸುಬ್ಬಾರೆಡ್ಡಿ ಅವರುಗಳು ಚಿಕ್ಕಬಳ್ಳಾಪುರ ಜಿಲ್ಲೆ ನಂದಿ ಹೋಬಳಿಯ ನೆಲಮಾಕಲಹಳ್ಳಿ ಗ್ರಾಮದ ಸರ್ವೆ ನಂ. 24ರಲ್ಲಿನ 84 ಎಕರೆ 1 ಗುಂಟೆ ಜಮೀನಿನಲ್ಲಿ ನಿರ್ಮಿಸಲು ಉದ್ದೇಶಿಸಿದ್ದ ಟೆಕ್ಸ್‌ಟೈಲ್ ಪಾರ್ಕ್‌ಗೆ ನೀಡಿದ್ದ ಜಮೀನನ್ನು ಕೃಷಿ ಇಲಾಖೆ ಹಿಂಪಡೆದಿರುವ ಬಗ್ಗೆ ಚರ್ಚೆ.

2. ಶ್ರೀಯುತರುಗಳಾದ ಹೆಚ್.ಡಿ.ಕುಮಾರಸ್ವಾಮಿ, ಜಿ.ಟಿ.ದೇವೇಗೌಡ, ಹೆಚ್.ಡಿ. ರೇವಣ್ಣ, ಕೆ.ಎಂ.ಶಿವಲಿಂಗೇಗೌಡ ಮತ್ತು ಎ.ಬಿ. ರಮೇಶ್ ಬಂಡಿಸಿದ್ದೇಗೌಡ ಮತ್ತು ಇತರರು ರಾಜ್ಯದಲ್ಲಿರುವ 5 ವಿದ್ಯುತ್ ಸರಬರಾಜು ಕಂಪನಿಗಳಿಂದ 16,000ಕೋಟಿ ನಷ್ಟವುಂಟಾಗಿದ್ದರೂ ಸಹ ಗ್ರಾಮಾಂತರ ಪ್ರದೇಶಗಳ ಮತ್ತು ಇತರೆ ಎಲ್ಲಾ ಗ್ರಾಹಕರುಗಳಿಗೆ ಸಮರ್ಪಕವಾಗಿ ವಿದ್ಯುತ್ ಸರಬರಾಜು ಒದಗಿಸುವಲ್ಲಿ ಸರ್ಕಾರ ವಿಫಲವಾಗಿರುವ ಬಗ್ಗೆ ಚರ್ಚೆ.

**ಮು.ತಿ.ನೋ.,**

## 3. ಪ್ರಶ್ನೋತ್ತರ

ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ಹದಿನಾರನೇ ಪಟ್ಟಿ

ಆ)(i) ದಿನಾಂಕ 26.06.2014ರ ನಾಲ್ಕನೇ ಪಟ್ಟಿಯಿಂದ ವರ್ಗಾವಣೆಗೊಂಡ ಶ್ರೀ ಸಿ.ಟಿ. ರವಿ ಅವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 60(296) : ಕಾರ್ಮಿಕ ಸಚಿವರು

(ii) ದಿನಾಂಕ 23.06.2014ರ ಒಂದನೇ ಪಟ್ಟಿಯಿಂದ ತಡೆಹಿಡಿಯಲಾದ ಶ್ರೀ ಅಪ್ಪಾಜಿ ಸಿ.ಎಸ್. ನಾಡಗೌಡ ಅವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 07(52) : ಸಣ್ಣ ನೀರಾವರಿ ಸಚಿವರು

(iii) ದಿನಾಂಕ 23.06.2014ರ ಒಂದನೇ ಪಟ್ಟಿಯಿಂದ ತಡೆಹಿಡಿಯಲಾದ ಶ್ರೀ ವಿ. ಸುನೀಲ್ ಕುಮಾರ್ ಅವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 10(72) : ಕಂದಾಯ ಸಚಿವರು

ಇ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ಹದಿನಾರನೇ ಪಟ್ಟಿ

## 4. ಸಭೆಯ ಮುಂದಿಡಲಾಗುವ ಕಾಗದ ಪತ್ರಗಳು

**ಶ್ರೀ ಸಿದ್ದರಾಮಯ್ಯ (ಮುಖ್ಯಮಂತ್ರಿಗಳು) ಅವರು:-**

ಭಾರತ ಸಂವಿಧಾನದ 151(2)ನೇ ಅನುಚ್ಛೇದದ ಮೇರೆಗೆ 31ನೇ ಮಾರ್ಚ್ 2013ಕ್ಕೆ ಕೊನೆಗೊಂಡ ವರ್ಷಕ್ಕೆ ಭಾರತದ ಲೆಕ್ಕನಿಯಂತ್ರಕರು ಮತ್ತು ಮಹಾಲೆಕ್ಕಪರಿಶೋಧಕರು ನೀಡಿರುವ ಸ್ಥಳೀಯ ಸಂಸ್ಥೆಗಳ ವರದಿ (ಸಂಖ್ಯೆ-5)ಯನ್ನು ಸಭೆಯ ಮುಂದಿಡುವುದು.

## 5. ಶಾಸನ ರಚನೆ

### ವಿಧೇಯಕವನ್ನು ಪರ್ಯಾಲೋಚಿಸುವುದು ಹಾಗೂ ಅಂಗೀಕರಿಸುವುದು

**ಕರ್ನಾಟಕ ಕೆರೆ ಅಭಿವೃದ್ಧಿ ಪ್ರಾಧಿಕಾರ ವಿಧೇಯಕ, 2014**
**ಶ್ರೀ ಶಿವರಾಜ್ ಎಸ್. ತಂಗಡಗಿ (ಸಣ್ಣ ನೀರಾವರಿ ಸಚಿವರು) ಅವರು:-**

ಅ) 2014 ನೇ ಸಾಲಿನ ಕರ್ನಾಟಕ ಕೆರೆ ಅಭಿವೃದ್ಧಿ ಪ್ರಾಧಿಕಾರ ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು.

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

ಪು.ತಿ.ನೋ.,

## 6. ಗಮನ ಸೆಳೆಯುವ ಸೂಚನೆಗಳು

1. ಶ್ರೀ ಎಂ. ಕೃಷ್ಣಾರೆಡ್ಡಿ ಅವರು ಚಿಂತಾಮಣಿ ಸಾರ್ವಜನಿಕ ಆಸ್ಪತ್ರೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ವೈದ್ಯಾಧಿಕಾರಿಗಳ ಕರ್ತವ್ಯ ಲೋಪದಿಂದ ಗರ್ಭಿಣಿಯೊಬ್ಬರು ಮೃತಪಟ್ಟಿದ್ದು ಸರ್ಕಾರದಿಂದ ಪರಿಹಾರ ನೀಡುವ ಹಾಗೂ ಸಂಬಂಧಪಟ್ಟ ವೈದ್ಯರ ಮೇಲೆ ಕ್ರಮಕೈಗೊಳ್ಳುವ ಬಗ್ಗೆ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ಗಮನ ಸೆಳೆಯುವುದು.

2. ಶ್ರೀ ಸಿ.ಎನ್. ಬಾಲಕೃಷ್ಣ ಅವರು ಶ್ರವಣಬೆಳಗೊಳ ಕ್ಷೇತ್ರ ವ್ಯಾಪ್ತಿಯ ನುಗ್ಗೇಹಳ್ಳಿಯಲ್ಲಿ ಮೊರಾರ್ಜಿದೇಸಾಯಿ ವಸತಿ ಶಾಲೆಯನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡಿದ್ದರೂ ಸಹ ಕಟ್ಟಡ ನಿರ್ಮಾಣ ಮಾಡದಿರುವುದರಿಂದ ವಿದ್ಯಾರ್ಥಿಗಳಿಗೆ ತೊಂದರೆಯಾಗುತ್ತಿರುವ ಬಗ್ಗೆ ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರ ಗಮನ ಸೆಳೆಯುವುದು.

3. ಶ್ರೀ ಮುನಿರತ್ನ ಅವರು ಬೆಂಗಳೂರಿನ ಸದಾಶಿವನಗರದ 16ನೇ ಅಡ್ಡರಸ್ತೆಯಲ್ಲಿರುವ ಬೃಂದಾವನ ದೇವಸ್ಥಾನಕ್ಕೆ ಭಕ್ತಾದಿಗಳ ಪ್ರವೇಶವನ್ನು ನಿರ್ಬಂಧಿಸಿರುವ ಹಾಗೂ ಸದರಿ ದೇವಸ್ಥಾನವನ್ನು ಮುಜರಾಯಿ ಇಲಾಖೆಗೆ ಹಸ್ತಾಂತರಿಸುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

4. ಶ್ರೀ ಶಿವಾನಂದ ಎಸ್. ಪಾಟೀಲ್ ಅವರು ಕೇಂದ್ರ ಸರ್ಕಾರ ನಿರ್ಮಲ ಭಾರತ ಅಭಿಯಾನ ಯೋಜನೆಯಡಿ ಗ್ರಾಮ ಪಂಚಾಯತಿಗಳಲ್ಲಿ ಶೌಚಾಲಯ ನಿರ್ಮಾಣಕ್ಕೆ ನೀಡಿರುವ ಧನ ಸಹಾಯದಲ್ಲಿ ಗ್ರಾಮೀಣ ಭಾಗದಲ್ಲಿ ಅವ್ಯವಹಾರ ನಡೆದಿರುವ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಗಮನ ಸೆಳೆಯುವುದು.

5. ಶ್ರೀ ಆರ್. ನರೇಂದ್ರ ಅವರು ಕರ್ನಾಟಕದಲ್ಲಿ ವಾಸ ಮಾಡುತ್ತಿರುವ ಸೋಲಿಗ ಜನಾಂಗ(ಗಿರಿಜನರು) ಇವರನ್ನು ಮೂಲ ನಿವಾಸಿಗಳ ಗುಂಪಿಗೆ ಸೇರಿಸುವ ಬಗ್ಗೆ ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರ ಗಮನ ಸೆಳೆಯುವುದು.

6. ಶ್ರೀ ಕೆ.ಎಂ. ಶಿವಲಿಂಗೇಗೌಡ ಅವರು ಪ್ರಾಥಮಿಕ ಶಾಲೆಯಿಂದ ಪ್ರೌಢಶಾಲೆಗೆ ಬಡ್ತಿ ಹೊಂದಿದ ಸಹ ಶಿಕ್ಷಕರುಗಳ ವೇತನದಲ್ಲಿ ಆಗುತ್ತಿರುವ ತಾರತಮ್ಯದ ಬಗ್ಗೆ ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಗಮನ ಸೆಳೆಯುವುದು.

7. ಶ್ರೀ ನಾರಾಯಣಗೌಡ ಅವರು ಕೆ.ಆರ್. ಪೇಟೆ ತಾಲ್ಲೂಕಿನಲ್ಲಿರುವ ಪ್ರವಾಸಿ ತಾಣಗಳು ಮೂಲಭೂತ ಸೌಕರ್ಯಗಳಿಂದ ವಂಚಿತವಾಗಿರುವ ಬಗ್ಗೆ ಮಾನ್ಯ ಉನ್ನತ ಶಿಕ್ಷಣ ಮತ್ತು ಪ್ರವಾಸೋದ್ಯಮ ಸಚಿವರ ಗಮನ ಸೆಳೆಯುವುದು.

**ಮು.ತಿ.ನೋ.,**

8. ಶ್ರೀ ಎಸ್. ಚಿಕ್ಕಮಾದು ಅವರು ನಂಜನಗೂಡು ತಾಲ್ಲೂಕು ಕಳಲೆ ಗ್ರಾಮದ 24ಮನೆ ತೆಲಗು ಶೆಟ್ಟರ ಹಾಗೂ ಹುಣಸೂರು ತಾಲ್ಲೂಕು ಬಿಳಿಕೆರೆ ಗ್ರಾಮದ 20 ಕುಟುಂಬಗಳ ಮೇಲಿನ ದೌರ್ಜನ್ಯ ಹಾಗೂ ಸಾಮಾಜಿಕ ಬಹಿಷ್ಕಾರ ಹಾಕಿರುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

9. ಶ್ರೀ ಕೆ.ಎಂ. ತಿಮ್ಮರಾಯಪ್ಪ ಅವರು ಪಾವಗಡ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ವೈ.ಎನ್. ಹೊಸಕೋಟೆ ಗ್ರಾಮ ಪಂಚಾಯತಿಯನ್ನು ಪಟ್ಟಣ ಪಂಚಾಯತಿಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ ಮಾನ್ಯ ಪೌರಾಡಳಿತ, ಸ್ಥಳೀಯ ಸಂಸ್ಥೆಗಳು, ಸಾರ್ವಜನಿಕ ಉದ್ದಿಮೆಗಳ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಮತ್ತು ವಕ್ಫ್ ಸಚಿವರ ಗಮನ ಸೆಳೆಯುವುದು.

10. ಶ್ರೀ ಮಧು ಎಸ್. ಬಂಗಾರಪ್ಪ ಅವರು ಸೊರಬ ವಿಧಾನಸಭಾ ಕ್ಷೇತ್ರದಲ್ಲಿ ಕಳೆದ ಸಾಲಿನಲ್ಲಿ ಅತೀವೃಷ್ಠಿಯಿಂದ ಹಾನಿಯಾಗಿರುವ ಕಾಮಗಾರಿಗಳಿಗೆ ಅನುದಾನವನ್ನು ಬಿಡುಗಡೆ ಮಾಡದಿರುವ ಬಗ್ಗೆ ಕಂದಾಯ ಸಚಿವರ ಗಮನ ಸೆಳೆಯುವುದು.

11. ಶ್ರೀ ಲಕ್ಷ್ಮಣ ಸಂಗಪ್ಪ ಸವದಿ ಅವರು ಅಥಣಿ ಪಟ್ಟಣದಲ್ಲಿ ಉಪ ಕಾರಾಗೃಹ ನಿರ್ಮಾಣಕ್ಕಾಗಿ ಕಾಯ್ದಿರಿಸಿರುವ ಜಮೀನು ಸೂಕ್ತವಾಗಿಲ್ಲದಿರುವುದರಿಂದ ಬೇರೆಡೆಗೆ ಜಮೀನು ನೀಡುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

12. ಶ್ರೀ ಕೆ.ಬಿ. ಕೋಳಿವಾಡ ಅವರು ಹಾವೇರಿ ಜಿಲ್ಲೆಯ ರಾಣೆಬೆನ್ನೂರು ತಾಲ್ಲೂಕಿನ ಮುಷ್ಟೂರು ಗ್ರಾಮದಲ್ಲಿ ಅತೀವೃಷ್ಟಿಯಾಗಿರುವುದರಿಂದ ಆ ಗ್ರಾಮವನ್ನು ಸ್ಥಳಾಂತರಿಸುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

13. ಶ್ರೀ ಹೆಚ್.ಎಸ್. ಶಿವಶಂಕರ ಅವರು ರಾಜ್ಯದಲ್ಲಿ ಸಾಕಷ್ಟು ಮಳೆ ಇಲ್ಲದೆ ತೀವ್ರ ವಿದ್ಯುತ್ ಅಭಾವ ಉಂಟಾಗಿರುವ ಬಗ್ಗೆ ಮಾನ್ಯ ಇಂಧನ ಸಚಿವರ ಗಮನ ಸೆಳೆಯುವುದು.

14. ಶ್ರೀ ಎಸ್. ಭೀಮಾ ನಾಯ್ಕ್ ಅವರು ಹಗರಿಬೊಮ್ಮನಹಳ್ಳಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ 16 ಏತ ನೀರಾವರಿ ಕಾಲುವೆ ಮತ್ತು ಪಂಪ್‌ಸೆಟ್‌ಗಳ ದುರಸ್ತಿಗಾಗಿ ಸರ್ಕಾರದಿಂದ ಅನುದಾನ ಬಿಡುಗಡೆಯಾಗದೆ ರೈತರುಗಳಿಗೆ ತೊಂದರೆಯಾಗಿರುವ ಬಗ್ಗೆ ಮಾನ್ಯ ಸಣ್ಣ ನೀರಾವರಿ ಸಚಿವರ ಗಮನ ಸೆಳೆಯುವುದು.

15. ಶ್ರೀ ಹೆಚ್.ಕೆ. ಕುಮಾರಸ್ವಾಮಿ ಅವರು ಹಾಸನ ಜಿಲ್ಲೆ ಸಕಲೇಶಪುರ ರಾಷ್ಟ್ರೀಯ ಹೆದ್ದಾರಿಯ ಶಿರಾಡಿ ಘಾಟ್ ವ್ಯಾಪ್ತಿಯಲ್ಲಿ ಅನೇಕ ಅಪಘಾತಗಳು ಸಂಭವಿಸುತ್ತಿರುವುದರಿಂದ ಈ ತಾಲ್ಲೂಕು ಕೇಂದ್ರದಲ್ಲಿ ತುರ್ತು ಅಪಘಾತ ನಿಗಾಕೇಂದ್ರ (ಟ್ರಾಮಾ) ಸ್ಥಾಪನೆ ಮಾಡುವುದರ ಬಗ್ಗೆ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ಗಮನ ಸೆಳೆಯುವುದು.

16. ಶ್ರೀಮತಿ ಶಶಿಕಲಾ ಅಣ್ಣಾಸಾಹೇಬ ಜೊಲ್ಲೆ ಅವರು ರಾಜ್ಯದಲ್ಲಿ ಇತ್ತೀಚೆಗೆ ಬಾಯ್ತೆರದ ಕೊಳವೆ ಬಾವಿಗಳು ಅಮಾಯಕ ಮಕ್ಕಳ ಮೃತ್ಯುಕೂಪವಾಗಿರುವುದರಿಂದ ವಿಫಲವಾದ ಕೊಳವೆ ಬಾವಿಗಳನ್ನು ಕೂಡಲೇ ಮುಚ್ಚಲು ಹಾಗೂ ನಿರ್ಲಕ್ಷ್ಯ ಪ್ರಕರಣದಲ್ಲಿ ತಪ್ಪಿತಸ್ಥರ ವಿರುದ್ಧ ಕ್ರಮಕೈಗೊಳ್ಳುವ ಬಗ್ಗೆ ಮಾನ್ಯ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳು ಹಾಗೂ ಸಂಸದೀಯ ವ್ಯವಹಾರಗಳು, ಶಾಸನ ರಚನೆ ಮತ್ತು ಪಶುಸಂಗೋಪನೆ ಸಚಿವರ ಗಮನ ಸೆಳೆಯುವುದು.

**ಪು.ತಿ.ನೋ.,**

17. ಶ್ರೀ ಪ್ರಮೋದ್ ಮಧ್ವರಾಜ್ ಅವರು ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜುಗಳ ಅಭಿವೃದ್ಧಿ ಸಮಿತಿಗಳ ರಚನೆಯ ಬಗ್ಗೆ ಮಾನ್ಯ ಉನ್ನತ ಶಿಕ್ಷಣ ಮತ್ತು ಪ್ರವಾಸೋದ್ಯಮ ಸಚಿವರ ಗಮನ ಸೆಳೆಯುವುದು.

18. ಶ್ರೀ ಎಲ್. ಎ. ರವಿ ಸುಬ್ರಹ್ಮಣ್ಯ ರಾಜ್ಯದ ಸರ್ಕಾರಿ ಪ್ರೌಢ ಶಾಲೆಗಳಲ್ಲಿ ಈ ಹಿಂದೆ ಇದ್ದ ಮಾಹಿತಿ ಸಿಂಧು ಯೋಜನೆಯನ್ನು ಪುನರಾರಂಭಿಸುವ ಬಗ್ಗೆ ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಗಮನ ಸೆಳೆಯುವುದು.

19. ಶ್ರೀ ಹೆಚ್.ಡಿ. ರೇವಣ್ಣ ಅವರು ಹಾಸನದ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿನ ಪ್ರಯೋಗ ಶಾಲೆಗಳಿಗೆ ಅಗತ್ಯ ಸಲಕರಣೆಗಳನ್ನು ಒದಗಿಸದಿರುವುದರಿಂದ ಹಾಗೂ ಸಂಜೆ ಇಂಜಿನಿಯರಿಂಗ್ ಕಾಲೇಜು ಮಂಜೂರಾಗಿದ್ದರೂ ಮೂಲಭೂತ ಸೌಲಭ್ಯಗಳ ಮತ್ತು ಬೋಧಕ/ ಬೋಧಕೇತರ ಸಿಬ್ಬಂದಿಗಳ ಕೊರತೆಯಿಂದ ವಿದ್ಯಾರ್ಥಿಗಳಿಗೆ ತೊಂದರೆಯಾಗುತ್ತಿರುವ ಬಗ್ಗೆ ಮಾನ್ಯ ಉನ್ನತ ಶಿಕ್ಷಣ ಮತ್ತು ಪ್ರವಾಸೋದ್ಯಮ ಸಚಿವರ ಗಮನ ಸೆಳೆಯುವುದು.

20. ಶ್ರೀ ಎಸ್. ಆರ್. ವಿಶ್ವನಾಥ ಅವರು ನೈಸ್ ರಸ್ತೆಗಾಗಿ ಜಮೀನು ಕಳೆದುಕೊಂಡ ರೈತರಿಗೆ ಪರಿಹಾರ ವಿತರಣೆಯಾಗದಿರುವುದರಿಂದ ರೈತರಿಗೆ ತೊಂದರೆಯಾಗಿರುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

21. ಶ್ರೀ ಜಿ.ಹೆಚ್. ಶ್ರೀನಿವಾಸ ಅವರು ತರಿಕೆರೆ ಮೆಸ್ಕಾಂ ಉಪ ವಿಭಾಗದಲ್ಲಿ ಮತ್ತು ಅಜ್ಜಂಪುರ ಉಪ ವಿಭಾಗದಲ್ಲಿ ಟಿ.ಸಿಗಳು ಸುಟ್ಟು ಹೋಗಿರುವುದರಿಂದ ಹೊಸ ಟಿ.ಸಿಗಳನ್ನು ಈ ತಾಲ್ಲೂಕಿಗೆ ನೀಡುವ ಬಗ್ಗೆ ಮಾನ್ಯ ಇಂಧನ ಸಚಿವರ ಗಮನ ಸೆಳೆಯುವುದು.

22. ಶ್ರೀ ಅಖಂಡ ಶ್ರೀನಿವಾಸಮೂರ್ತಿ ಅವರು ಬೆಂಗಳೂರು ನಗರ ಪುಲಕೇಶಿನಗರದ ವಿಧಾನಸಭಾ ವ್ಯಾಪ್ತಿಯಲ್ಲಿ ಬರುವ ಆರಕ್ಷಕ ಠಾಣೆಗಳಲ್ಲಿ ಸಿಬ್ಬಂದಿಗಳ ಕೊರತೆಯಿಂದ ಸಾರ್ವಜನಿಕರಿಗೆ ತೊಂದರೆಯಾಗುತ್ತಿರುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

23. ಶ್ರೀ ಕೆ. ಗೋಪಾಲ ಪೂಜಾರಿ ಅವರು ಉಡುಪಿ ಜಿಲ್ಲೆಯಲ್ಲಿ ರಾಜೀವ್‌ಗಾಂಧಿ ಗ್ರಾಮೀಣ ವಿದ್ಯುತ್ ಸಂಪರ್ಕ ಯೋಜನೆಯಡಿ ಅರ್ಹ ಬಿಪಿಎಲ್ ಕುಟುಂಬಗಳಿಗೆ ವಿದ್ಯುತ್ ಸಂಪರ್ಕ ಒದಗಿಸುವ ಬಗ್ಗೆ ಇಂಧನ ಸಚಿವರ ಗಮನ ಸೆಳೆಯುವುದು.

24. ಶ್ರೀ ಎನ್ .ಚಲುವರಾಯಸ್ವಾಮಿ ಅವರು ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರದ ಆಯುಕ್ತರು, ಪ್ರಾಧಿಕಾರದ ಸಭೆಗಳಲ್ಲಿ ಅನುಮೋದನೆ ಪಡೆಯದ ವಿಷಯಗಳನ್ನು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುತ್ತಿರುವ ಬಗ್ಗೆ ಮಾನ್ಯ ನಗರಾಭಿವೃದ್ಧಿ ಸಚಿವರ ಗಮನ ಸೆಳೆಯುವುದು.

25. ಶ್ರೀ ವೈ.ಎನ್. ರುದ್ರೇಶ್‌ಗೌಡ ಅವರು ರಾಷ್ಟ್ರೀಯ ಹೆದ್ದಾರಿ 234 ಬಾಣಾವರ-ಬೇಲೂರು ನಡುವಿನ ರಸ್ತೆ ಅಭಿವೃದ್ಧಿ ಕಾಮಗಾರಿಯನ್ನು ಪೂರ್ಣಗೊಳಿಸುವ ಬಗ್ಗೆ ಮಾನ್ಯ ಲೋಕೋಪಯೋಗಿ ಸಚಿವರ ಗಮನ ಸೆಳೆಯುವುದು.

**ಪು.ತಿ.ನೋ.,**

26. ಶ್ರೀ ಕೆ. ಷಡಕ್ಷರಿ ಅವರು ತಿಪಟೂರು ಪ್ರಥಮ ದರ್ಜೆ ಕಾಲೇಜಿನಲ್ಲಿ ಕೊಠಡಿಗಳ ಕೊರತೆಯಿಂದ ಉಂಟಾಗಿರುವ ತೊಂದರೆಯ ಬಗ್ಗೆ ಮಾನ್ಯ ಉನ್ನತ ಶಿಕ್ಷಣ ಮತ್ತು ಪ್ರವಾಸೋದ್ಯಮ ಸಚಿವರ ಗಮನ ಸೆಳೆಯುವುದು.

27. ಶ್ರೀ ಗೋವಿಂದ ಎಂ. ಕಾರಜೋಳ ಅವರು ಕರ್ನಾಟಕ ಕೆ.ಪಿ.ಟಿ.ಸಿ.ಎಲ್ ಹಾಗೂ ಬೆಂಗಳೂರು, ಚಾಮುಂಡೇಶ್ವರಿ, ಗುಲಬರ್ಗಾ, ಮಂಗಳೂರು ಮತ್ತು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗಳ ಮೂಲಕ ಸಹಾಯಕ ಇಂಜಿನಿಯರ್, ಕಿರಿಯ ಇಂಜಿನಿಯರ್ ಹಾಗೂ ಅಕೌಂಟೆಂಟ್ ಹುದ್ದೆಗಳ ನೇಮಕಾತಿಗಳಲ್ಲಿ ಅನುಸರಿಸಲಾಗುವ ಮಾನದಂಡಗಳ ಬಗ್ಗೆ ಮಾನ್ಯ ಇಂಧನ ಸಚಿವರ ಗಮನ ಸೆಳೆಯುವುದು.

**ಪಿ.ಓಂಪ್ರಕಾಶ**
ಕಾರ್ಯದರ್ಶಿ

*Raj N*

ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.
(www.kar.nic.in/kla)